With best compliments from the author.

ಪುಸ್ತಕ ಪ್ರಚಾರ ಮಾಲೆ—೧.

® 091095

# ಕ್ರಾಂತಿವೀರ

92B
SEN EK

ಬರೆದವರು:

— "ಈಶ್ವರ"

ಮಾರ್ಚ್, ೧೯೫೪.

ಪ್ರಕಾಶಕರು:

**ಪೌರ ಪುಸ್ತಕ-ವಾಚನಾಲಯ,**

ಮಂಗಳೂರು-1.

ಈ ಪುಸ್ತಕವನ್ನು ಬರೆಯಲು
ಶ್ರೀ। ಗೋಪಾಲ ಥಾಕುರ್ ಅವರ
"Bhagat Singh — The Man and his Ideas",
ಶ್ರೀ। ಅಜಯ ಕುಮಾರ ಘೋಷರ
"Bhagat Singh and his Comrades",
ಶ್ರೀ। ಜಿತೇಂದ್ರನಾಥ ಸನ್ಯಾಲರ
"The Life of Bhagat Singh"
ಎಂಬ ಪುಸ್ತಕಗಳ ನೆರವು ಪಡೆಯಲಾಗಿದೆ.

— ಲೇಖಕ

ಬೆಲೆ: ಎರಡಾಣೆ

ಮುದ್ರಕರು:
ಉದಯ ಪ್ರಿಂಟರ್ಸ್ ಎಂಡ್ ಪಬ್ಲಿಕೇಶನ್ಸ್ ಲಿಮಿಟೆಡ್,
ಮಂಗಳೂರು–3.

# ಕ್ರಾಂತಿ ವೀರ

## ಒಂದು

ಈ ಶತಮಾನದ ಮೂರನೆಯ ದಶಕ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ಅತ್ಯಂತ ಮಹತ್ವದ ಕಾಲ. ಸ್ವಾತಂತ್ರ್ಯ ಹೋರಾಟವು ಅಷ್ಟರಲ್ಲೇ ಒಂದು ಶಕ್ತಿ ಯುತ ಸಾಮೂಹಿಕ ಚಳವಳವಾಗಿ ಮಾರ್ಪಟ್ಟಿತ್ತು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ದಬ್ಬಾಳಿಕೆಯನ್ನು ಕಂಡು ಬೇಸತ್ತಿದ್ದ ಜನತೆಯಲ್ಲಿ, ವಿದೇಶೀಯ ನಿರಂಕುಶ ಪ್ರಭುತ್ವವನ್ನು ಕೊನೆ ಗಾಣಿಸಿ, ಸ್ವತಂತ್ರರಾಗಬೇಕೆಂಬ ಉತ್ಕಟೇಚ್ಛೆ ಬಲವಾಗಿತ್ತು.

ಭಾರತದ ರಾಜಕೀಯ ರಂಗದಲ್ಲಿ ಅಷ್ಟರಲ್ಲೇ ಗಾಂಧಿಜಿ ಪ್ರವೇಶಿಸಿದ್ದರು. ಸ್ವಾತಂತ್ರ್ಯ ಚಳವಳದ ಮೇಲೆ ಅವರ ಅಹಿಂಸಾ ತತ್ವ ಹೆಚ್ಚಿನ ಪರಿಣಾಮವನ್ನುಂಟುಮಾಡಿತ್ತು. ಆದರೆ ಗಾಂಧಿಜಿಯ ಅಹಿಂಸೆಯಿಂದಲೇ ಸ್ವರಾಜ್ಯಗಳಿಸಬೇ ಕೆಂಬ ಧೋರಣೆಯನ್ನು ಒಪ್ಪದ ಅನೇಕ ಕ್ರಾಂತಿಕಾರಿ ಯುವ ಕರು ದೇಶದಲ್ಲಿದ್ದರು.

ಹಿಂಸೆ ಅಥವಾ ಅಹಿಂಸೆ ಈ ಕ್ರಾಂತಿಕಾರಿಗಳ ಜೀವ ನದ ಗುರಿಯಲ್ಲ. ದೇಶದ ಮೇಲೆ ಬಲವಾಗಿ ಕಾಲೂರಿರುವ ಬಿಳಿಯ ಸಾಮ್ರಾಜ್ಯಶಾಹಿಯನ್ನು ಎಚ್ಚರಿಸಿ, ಭಾರತ ಶಕ್ತಿಯ ಅರಿವನ್ನು ಅವರಿಗೆ ಮಾಡಿಕೊಡಬೇಕು; ಇದಕ್ಕೆ ಹಿಂಸೆಯನ್ನು ಪ್ರಯೋಗಿಸಬೇಕಾಗಿ ಬಂದರೂ ದೊಡ್ಡದಲ್ಲ ಎಂಬುದು ಅವರ ಧೋರಣೆಯಾಗಿತ್ತು.

ಈ ಕ್ರಾಂತಿಕಾರಿ ಗುಂಪಿಗೆ ಸೇರಿದವರು ಸಾಹಸಿಗಳು. ದೇಶಪ್ರೇಮದ ಉಜ್ವಲ ಪ್ರತಿಭೆಯಿಂದ ಬೆಳಗಿದವರು. ತಾಯ್ನಾಡಿಗಾಗಿ ಯಾವ ಕೆಲಸವನ್ನು ಮಾಡಲೂ ಹಿಂಜರಿಯದವರು. ದೇಶಕ್ಕಾಗಿ ಆತ್ಮಾರ್ಪಣೆ ಮಾಡಲು ಕೂಡ ಸಿದ್ಧರಿದ್ದ ತ್ಯಾಗವೀರರು ಅವರು.

ಭಗತ್‌ಸಿಂಗ್ ಅಂಥವರು.

## ಎರಡು

ಭಗತ್‌ಸಿಂಗ್ ಪಂಜಾಬ ಪ್ರಾಂತದಲ್ಲಿ 1907ರಲ್ಲಿ ಹುಟ್ಟಿದರು. ಅವರ ಮನೆತನವು ದೇಶಭಕ್ತಿಗೆ ಹೆಸರು ಪಡೆದಿತ್ತು. ತಂದೆ ಕಿಶನ್‌ಸಿಂಗ್ ಆಗಿನ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ಇಂತಹ ಮನೆತನದಲ್ಲಿ ಹುಟ್ಟಿದ ಭಗತ್‌ಸಿಂಗರಲ್ಲಿ ಚಿಕ್ಕ ಪ್ರಾಯದಲ್ಲೇ ದೇಶಭಕ್ತಿ ಕಾಣಿಸಿಕೊಂಡಿತು. ದೇಶದ ಜನರ ದಾಸ್ಯವನ್ನು ನೋಡಿ ಅವರು ತುಂಬಾ ಮರುಗಿದರು. ಆದರೆ ಬಾಯಿ ಮುಚ್ಚಿ ಕುಳಿತುಕೊಳ್ಳಲಿಲ್ಲ. ಈ ದಾಸ್ಯವನ್ನು ಕೊನೆಗಾಣಿಸಿಯೇ ಬಿಡಬೇಕೆಂದು ನಿಶ್ಚಯಿಸಿದರು.

ಭಗತ್‌ಸಿಂಗ್ ಕಾಲೇಜಿನಲ್ಲಿ ಓದುತ್ತಿದ್ದಾಗ ದೇಶದ ಹೀನಸ್ಥಿತಿಯ ಕುರಿತು ತುಂಬಾ ಅಭ್ಯಾಸ ಮಾಡಿದರು. ದೇಶವು ಈ ಸ್ಥಿತಿಗೆ ಬರಲು ಕಾರಣವೇನು ಎಂಬುದನ್ನೂ ಜನರನ್ನು ಉದ್ಧಾರ ಮಾಡಲು ದಾರಿ ಏನು ಎಂಬುದನ್ನೂ ತಿಳಿದುಕೊಳ್ಳಲು ಅನೇಕ ಗ್ರಂಥಗಳನ್ನು ಓದಿದರು. ಇತರ ದೇಶಗಳ ಜನರು ಹೇಗೆ ಸ್ವಾತಂತ್ರ್ಯ ಪಡೆದರೆಂಬುದನ್ನೂ

ತಿಳಿದುಕೊಂಡರು. ಕಾಲೇಜಿನಲ್ಲಿದ್ದಾಗಲೇ ಅವರಿಗೆ ಮುಂದಿನ ಕ್ರಾಂತಿಕಾರಿ ಸಂಗಾತಿಗಳಾದ ಸುಖದೇವ ಮೊದಲಾದವರ ಪರಿಚಯುವಾಯಿತು.

ಅದು ರಷ್ಯದಲ್ಲಿ ಕ್ರಾಂತಿಯನ್ನು ಸಾಧಿಸಿದ ಸಮಯ. ರಷ್ಯದ ಜನತೆ ಝಾರಶಾಹಿಯ ವಿರುದ್ಧ ಹೋರಾಡಿ ವಿಜಯ ವನ್ನು ಪಡೆದಿತ್ತು. ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ಇತರ ಜನಾಂಗಗಳಿಗೆ ರಷ್ಯದ ಜನತೆಯ ವಿಜಯ ಅಪೂರ್ವ ಸ್ಫೂರ್ತಿ ಯನ್ನು ಕೊಟ್ಟಿತ್ತು. ಭಗತ್ ಸಿಂಗ್ ಈ ಕ್ರಾಂತಿಯ ಇತಿ ಹಾಸವನ್ನು ಓದಿದರು. ಅದನ್ನು ಓದಿದ ಮೇಲಂತೂ, ಸ್ವಾತಂತ್ರ್ಯ ಪಡೆಯುವುದಕ್ಕಾಗಿ ಸಶಸ್ತ್ರ ಹೋರಾಟವನ್ನೇ ಪ್ರಾರಂಭಿಸಬೇಕೆಂದು ನಿಶ್ಚಯಿಸಿದರು. ಬ್ರಿಟಿಷರೊಡನೆ ಸಮರ ಹೂಡಿ, ಅವರನ್ನು ಈ ದೇಶದಿಂದ ಓಡಿಸಿ, ಬಡವ ಬಲ್ಲಿದ ಎಂಬ ಭೇದವಿಲ್ಲದ ಸಮತಾವಾದೀ ರಾಷ್ಟ್ರವೊಂದನ್ನು ಸ್ಥಾಪಿಸ ಬೇಕೆನ್ನುವ ಯೋಜನೆ ಅವರದಾಗಿತ್ತು.

ಭಗತ್ ಸಿಂಗರ ಆಲೋಚನೆಯೇನೋ ಚೆನ್ನಾಗಿತ್ತು. ಆದರೆ ಅದೆಲ್ಲ ಅವರೊಬ್ಬರಿಂದಲೇ ಆಗುವುದು ಹೇಗೆ? ಅದಕ್ಕೆ ಜನರ ಬೆಂಬಲ ಬೇಕು; ಅವರ ತತ್ವದಲ್ಲಿ ವಿಶ್ವಾಸವಿರುವವರ ನ್ನೆಲ್ಲ ಕೂಡಿಹಾಕಬೇಕು. ಆಗಲೇ ದೇಶದಲ್ಲಿ ಹಲವು ಕ್ರಾಂತಿಕಾರಿ ಸಂಸ್ಥೆಗಳು ಇದ್ದುವು. ಆದರೆ ಈ ಸಂಸ್ಥೆಗಳೊ ಳಗೆ– ಕ್ರಾಂತಿಯಲ್ಲಿ ವಿಶ್ವಾಸವಿರುವ ಎಲ್ಲ ಜನರೊಳಗೆ— ಪರಸ್ಪರ ಸಹಕಾರ, ಸಂಪರ್ಕ ಇದ್ದಿಲ್ಲ. ಅಲ್ಲದೆ, ಕೆಲವರು ಕ್ರಾಂತಿಕಾರಿಗಳು ಆಗ ತಾನೇ ನಡೆದ ಒಂದು ಪ್ರಕ ರಣದಲ್ಲಿ ಗಲ್ಲಿನ ಶಿಕ್ಷೆಗೆ ಒಳಗಾಗಿದ್ದರು. ಅನೇಕರು ಜೈಲಿ

ನಲ್ಲಿದ್ದರು. ಇದರಿಂದಾಗಿ ಕ್ರಾಂತಿಕಾರಿಗಳಲ್ಲಿ ಒಂದು ರೀತಿಯ ಭಯ ಹುಟ್ಟಿತ್ತು. ಅವರಲ್ಲಿದ್ದ ಉತ್ಸಾಹವೆಲ್ಲ ಕುಗ್ಗಿ ಹೋಗಿತ್ತು. ಈ ಸಂದರ್ಭದಲ್ಲಿ ಭಗತ್‌ಸಿಂಗರು ದೇಶದಲ್ಲೆಲ್ಲ ಸಂಚಾರ ಮಾಡಿ, ಕ್ರಾಂತಿಕಾರಿಗಳನ್ನೆಲ್ಲ ಕೂಡಿಸಿ, ಒಂದು ಬಲವಾದ ಕ್ರಾಂತಿ ಪಕ್ಷವನ್ನು ಕಟ್ಟಲು ಪ್ರಯತ್ನಿಸಿದರು.

ಆದರೆ ಈ ಸಂದರ್ಭದಲ್ಲಿ ಒಂದು ಘಟನೆ ನಡೆಯಿತು. ಭಗತ್‌ಸಿಂಗ್ ಲಾಹೋರಿನಲ್ಲಿದ್ದರು. ಅದು 1926ರ ಅಕ್ಟೋಬರ ತಿಂಗಳು; ದಸರೆಯ ಸಮಯ. ದಸರೆಯ ಉತ್ಸವದ ಮೆರವಣಿಗೆಯೊಂದು ಹೋಗುತ್ತಿದ್ದಾಗ ಯಾರೋ ಬಾಂಬು ಎಸೆದು, ಕೆಲವರು ಗಾಯಗೊಂಡರು. ಪೊಲೀಸರು, ಅದು ಕ್ರಾಂತಿಕಾರಿಗಳಿಂದಲೇ ನಡೆದಿರಬೇಕೆಂದು ಭಾವಿಸಿದರು. ಭಗತ್‌ಸಿಂಗರ ಬಂಧನವಾಯಿತು. ಅನೇಕ ದಿನಗಳ ವರೆಗೆ ಅವರನ್ನು ವಿಚಾರಣೆಯಿಲ್ಲದೆ ಜೈಲಿನಲ್ಲಿಟ್ಟರು. ಕೊನೆಗೆ ನ್ಯಾಯಾಧೀಶರು ನಲುವತ್ತು ಸಾವಿರ ರುಪಾಯಿ ಜಾಮೀನಿನ ಮೇಲೆ ಬಿಡುಗಡೆಮಾಡಿದರು.

ಬಿಡುಗಡೆಯಾದರೂ, ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಭಾಗವಹಿಸಬಾರದೆಂದು ನ್ಯಾಯಾಧೀಶರ ನಿರ್ಬಂಧವಿತ್ತು. ಆದರೂ ಅವರು ಸುಮ್ಮನಿರದೆ ಗುಪ್ತವಾಗಿಯೇ ಕೆಲಸಗಳನ್ನು ಮಾಡುತ್ತಿದ್ದರು. ಇದೇ ಸಮಯದಲ್ಲಿ ಅವರು 'ನವಜವಾನ ಭಾರತ ಸಭೆ' ಎಂಬ ಪಂಜಾಬಿನ ಕ್ರಾಂತಿಕಾರಿ ಯುವಕರ ಸಂಸ್ಥೆಯೊಂದನ್ನು ಸ್ಥಾಪಿಸಿದರು.

ಭಗತ್‌ಸಿಂಗರ ಪ್ರಯತ್ನದ ಪರಿಣಾಮವಾಗಿ 1928ರ ಸೆಪ್ಟೆಂಬರ ತಿಂಗಳಲ್ಲಿ ಡಿಲ್ಲಿಯಲ್ಲಿ ದೇಶದ ಎಲ್ಲ ಕ್ರಾಂತಿಕಾರಿ ಮುಖಂಡರ ಸಭೆಯೊಂದು ನಡೆಯಿತು. ಈ ಸಭೆಗೆ ಪ್ರಸಿದ್ಧ ಕ್ರಾಂತಿಕಾರಿಗಳಾದ ಚಂದ್ರಶೇಖರ ಅಜಾದರೂ ಬಂದಿದ್ದರು. ಇವರು ಆ ಮೇಲೆ 1931ರಲ್ಲಿ ಪೊಲೀಸರೊಡನೆ ಯುದ್ಧ ಮಾಡುತ್ತ ವೀರ ಮರಣವನ್ನು ಪಡೆದರು. ಡಿಲ್ಲಿಯ ಈ ಸಭೆಯಲ್ಲಿ ಹೊಸ ಕಾರ್ಯಕ್ರಮವೊಂದನ್ನು ಸ್ವೀಕರಿಸಲಾಯಿತು. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆಸಲು ಎಲ್ಲ ಯುವಕರೂ ಪ್ರತಿಜ್ಞೆಮಾಡಿದರು. ಕ್ರಾಂತಿಕಾರಿಗಳ ಒಂದು ಕೇಂದ್ರ ಸಂಸ್ಥೆಯನ್ನೂ ರಚಿಸಲಾಯಿತು. 'ಹಿಂದುಸ್ಥಾನ್ ಸೋಶಿಯಲಿಸ್ಟ್ ರಿಪಬ್ಲಿಕನ್ ಎಸೋಸಿಯೇಶನ್' ಎಂದು ಈ ಸಂಸ್ಥೆಗೆ ಹೆಸರಿಟ್ಟರು. ಈ ಸಂಸ್ಥೆಯ ಉದ್ದೇಶವು ಕೇವಲ ಬ್ರಿಟಿಷರನ್ನು ಓಡಿಸುವುದು ಮಾತ್ರ ಆಗಿರದೆ ಭಾರತದಲ್ಲಿ ಒಂದು ಸಮತಾವಾದಿ ಸರಕಾರವನ್ನು ಸ್ಥಾಪಿಸುವುದೂ ಆಗಿತ್ತು.

ಕ್ರಾಂತಿಪಕ್ಷಕ್ಕೆ ಸೇರಿದವರ ಜೀವನ ಸುಖಕರವಾಗಿರಲಿಲ್ಲ. ಅದರ ಮುಖ್ಯ ಕಾರ್ಯಕರ್ತರು ತಾಯಿತಂದೆಯರನ್ನೂ ಮನೆಮಠಗಳನ್ನೂ ಬಿಟ್ಟುಬರಬೇಕಿತ್ತು. ಹೊಟ್ಟೆತುಂಬ ಊಟವಿಲ್ಲ; ಉಳಕೊಳ್ಳಲು ಬೆಚ್ಚಗಿನ ಮನೆಯಿಲ್ಲ. ಕೆಲವೊಮ್ಮೆ ಅವರು ಎರಡು ಮೂರು ದಿನಗಳ ವರೆಗೆ ಕೇವಲ ಚಹಾ ಮಾತ್ರದಿಂದ ಜೀವಹಿಡಿದು ಇರಬೇಕಾಗುತ್ತಿತ್ತು. ಚಳಿಗಾಲದಲ್ಲಿ ಕೂಡ ಬೆಚ್ಚಗಿನ ಕಂಬಳಿಯಿಲ್ಲದೆ ಹರಕುಮುರುಕು ಮನೆಗಳಲ್ಲಿ, ಬರಿನೆಲದಲ್ಲಿ ಮುರುಟಿರಬೇಕಾಗುತ್ತಿತ್ತು. ಆದರೂ

ಅವರು ದೇಶಕ್ಕಾಗಿ ಯಾವ ಕಷ್ಟವನ್ನೂ ಎದುರಿಸಲು ಸಿದ್ಧ ರಿದ್ದರು. ಅವರಲ್ಲಿ ಉರಿಯುತ್ತಿದ್ದ ಸ್ವಾತಂತ್ರ್ಯಪ್ರೇಮ ಎಲ್ಲ ಸಂಕಷ್ಟಗಳನ್ನೂ ಮರೆಯುವಂತೆ ಮಾಡುತ್ತಿತ್ತು.

## ಮೂರು

ಸಾವಿರದ ಒಂಭೈನೂರ ಇಪ್ಪತ್ತೆಂಟರಲ್ಲಿ ಸೈಮನ್ ಕಮಿ ಶನ್ ಬಂತು. ನಮ್ಮ ದೇಶದಲ್ಲಿ ಯಾವ ರೀತಿಯ ಸುಧಾರಣೆ ಗಳನ್ನು ತರಬಹುದೆಂಬುದರ ಬಗ್ಗೆ ಬ್ರಿಟಿಷ್ ಪಾರ್ಲಿಮೆಂಟಿಗೆ ಸಲಹೆ ಕೊಡಲು ಈ ಕಮಿಶನನ್ನು ನೇಮಿಸಲಾಗಿತ್ತು. ಈ ಸಮಿತಿಯಲ್ಲಿ ಭಾರತೀಯರಾರೂ ಇರಲಿಲ್ಲ; ಎಲ್ಲರೂ ಬಿಳಿಜನ ರಾಗಿದ್ದರು. ಆದುದರಿಂದ ನಮ್ಮ ದೇಶದ ಮುಖಂಡರು ಕಮಿ ಶನನ್ನು ಬಹಿಷ್ಕರಿಸಲು ನಿಶ್ಚಯಿಸಿದರು. ಕಮಿಶನಿನ ಸದಸ್ಯರು ಹೋದಕಡೆಗಳಲ್ಲೆಲ್ಲಾ ಜನರು ಕಪ್ಪು ಪತಾಕೆಗಳನ್ನು ಹಿಡಿದು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿದರು.

ಸೈಮನ್ ಕಮಿಶನ್ ಲಾಹೋರಿಗೆ ಬಂದಾಗ ಅಲ್ಲಿಯ ಜನರು ಲಾಲಾ ಲಜಪತ ರೈ ಅವರ ನಾಯಕತ್ವದಲ್ಲಿ ದೊಡ್ಡ ಮೆರವಣಿಗೆ ಹೊರಟರು. ಸಭೆ-ಮೆರವಣಿಗೆಗಳನ್ನು ಜರಗಿಸ ಬಾರದೆಂದು ಪೊಲೀಸರು ಮೊದಲೇ ಆಜ್ಞೆಹೊರಡಿಸಿದ್ದರು. ಆದರೆ ಜನರು ಆ ಆಜ್ಞೆಯನ್ನು ಲೆಕ್ಕಿಸಲೇ ಇಲ್ಲ. ಪೊಲೀಸರು ಮೆರವಣಿಗೆ ಹೊರಟ ಜನರ ಮೇಲೆ ಕ್ರೂರರೀತಿಯ ದಬ್ಬಾಳಿಕೆ ನಡೆಸಿದರು. ಪೊಲೀಸ್ ಅಧಿಕಾರಿ ಸ್ಕಾಟನೇ ಮುಖಂಡ ರಾದ ಲಜಪತ ರೈ ಅವರ ಮೇಲೆ ಲಾಥಿಯ ಏಟುಗಳನ್ನು ಕೊಟ್ಟನು. ಲಾಥಿಯ ಪೆಟ್ಟಿನಿಂದಾಗಿ ಲಜಪತ ರೈ ಜ್ವರದಿಂದ

ಮಲಗಿದರು. ಅದೇ ಜ್ವರದಿಂದ ಅವರು ಮುಂದೆ ತೀರಿ ಕೊಂಡರು. ಜನರು ತಮ್ಮ ನೆಚ್ಚಿನ ಮುಖಂಡನ ನಿಧನಕ್ಕೆ ಸ್ಕಾಟನೇ ಕಾರಣ ಎಂದು ತಿಳಿದರು. ಸೇಡು ತೀರಿಸಿಕೊಳ್ಳಲು ಅವರಲ್ಲಿ ಕಿಚ್ಚು ಪ್ರಜ್ವಲಿಸುತ್ತಿತ್ತು.

ಲಜಪತ ರೈಯವರ ನಿಧನದ ಬಗ್ಗೆ ಚರ್ಚೆಮಾಡಲು ಕ್ರಾಂತಿಕಾರಿಗಳು ಸಭೆಸೇರಿದರು. ಕೊನೆಗೆ, ಅವರ ನಿಧನಕ್ಕೆ ಕಾರಣನಾದ ಸ್ಕಾಟನನ್ನು ಕೊನೆಗಾಣಿಸಿಯೇ ಬಿಡಬೇಕೆಂಬ ನಿರ್ಧಾರಕ್ಕೆ ಬಂದರು. ಅದಕ್ಕಾಗಿ ಭಗತ್‌ಸಿಂಗ್, ರಾಜಗುರು, ಸುಖದೇವ ಮತ್ತು ಚಂದ್ರಶೇಖರ ಅಜಾದ್ ಇವರನ್ನು ನೇಮಿಸ ಲಾಯಿತು. ರಾಜಗುರು ಮತ್ತು ಸುಖದೇವ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ಯಾವಾಗಲೂ ಭಗತ್‌ಸಿಂಗರ ಸಂಗಾತಿ ಗಳಾಗಿದ್ದರು.

ದಶಂಬರ 17 ಸ್ಕಾಟನ ಕೊಲೆಗೆ ನಿಶ್ಚಯಿಸಿದ ದಿನ ವಾಗಿತ್ತು. ರಾಜಗುರು ಮತ್ತು ಭಗತ್‌ಸಿಂಗ್ ಪೊಲೀಸು ಕಚೇರಿಯಿಂದಲೇ ಸ್ವಲ್ಪ ದೂರದಲ್ಲಿ ಸ್ಕಾಟನು ಹೋಗುತ್ತಿದ ದಾರಿಯಲ್ಲಿ ಕಾದು ನಿಂತರು. ಮಧ್ಯಾಹ್ನ ಸುಮಾರು ನಾಲ್ಕು ತಾಸಾಗಿರಬಹುದು. ಮೋಟರು ಸೈಕಲಿನಲ್ಲಿ ಪೊಲೀಸು ಅಧಿ ಕಾರಿಯೊಬ್ಬನು ಬಂದನು. ಸೈಕಲು ಸಮೀಪ ಬಂದೊಡ ನೆಯೇ ರಾಜಗುರು ಗುಂಡುಹಾರಿಸಿದರು. ಅಧಿಕಾರಿ ಪೆಟ್ಟಾಗಿ ನೆಲಕ್ಕುರುಳಿದ. ಕೂಡಲೇ ಭಗತ್‌ಸಿಂಗ್ ತನ್ನ ಕೈಯಲ್ಲಿದ ಪಿಸ್ತೂಲಿನಿಂದ ಅವನ ಎದೆಗೆ ಗುರಿಯಿಟ್ಟು ಹೊಡೆದರು. ಅಧಿಕಾರಿಯ ಪ್ರಾಣ ಹಾರಿಹೋಯಿತು. ಆದರೆ ಅದು ಲಜಪತ ರೈಯವರನ್ನು ಕೊಂದ ಸ್ಕಾಟ್ ಆಗಿರ

ಲಿಲ್ಲ. ಅಸಿಸ್ಟಾಂಟ್ ಪೊಲೀಸು ಸುಪರಿಂಟೆಂಡೆಂಟ್ ಸ್ಯಾಂಡರ್ಸ್ ಎಂಬವನಾಗಿದ್ದನು.

ಸ್ಯಾಂಡರ್ಸನ ಕೊಲೆಯ ಸುದ್ದಿ ನಗರದಲ್ಲೆಲ್ಲ ಹಬ್ಬಿತು. ಕೂಡಲೇ ಕ್ರಾಂತಿಕಾರಿಗಳನ್ನು ಹಿಡಿಯಲು ಪೊಲೀಸರು ಎಲ್ಲೆಡೆಗಳಲ್ಲಿಯೂ ಓಡಿದರು. ಭಗತ್‌ಸಿಂಗ್ ಮೊದಲಾದವರು ಅಲ್ಲೇ ಸಮೀಪದಲ್ಲಿದ್ದ ಕಾಲೇಜಿನ ವಸತಿಗೃಹಕ್ಕೆ ಹೋಗಿರುವರೆಂದು ತಿಳಿದು ಅವರು ಅಲ್ಲಿಗೂ ಮುತ್ತಿಗೆ ಹಾಕಿದರು. ಆದರೆ ಪೊಲೀಸರು ಬರುವ ಮೊದಲೇ ಅವರು ತಪ್ಪಿಸಿಕೊಂಡಿದ್ದರು.

ಪೊಲೀಸರು ಭಗತ್‌ಸಿಂಗರೇ ಸ್ಯಾಂಡರ್ಸನ್ನು ಕೊಲೆ ಮಾಡಿದವರೆಂದು ಖಂಡಿತ ಮಾಡಿದರು. ಅವರನ್ನು ಪತ್ತೆ ಹಚ್ಚುವುದಕ್ಕಾಗಿ ದಿಕ್ಕುದಿಕ್ಕಿಗೂ ಗೂಢಚಾರರನ್ನು ಕಳುಹಿಸಿದರು. ಆದರೆ ಈ ತುಂಟ ಕ್ರಾಂತಿಕಾರಿಯನ್ನು ಹಿಡಿಯುವುದು ಅವರಿಂದಾಗುವ ಕೆಲಸವಾಗಿರಲಿಲ್ಲ.

ಸ್ಯಾಂಡರ್ಸನ ಕೊಲೆಯಿಂದ ಜನರಿಗೆ ಕ್ರಾಂತಿಪಕ್ಷದ ಮೇಲಿನ ಅಭಿಮಾನ ಹೆಚ್ಚಿತು. ಅನೇಕರು ಪಕ್ಷಕ್ಕೆ ಧನ ಸಹಾಯ ಮಾಡಲು ಮುಂದೆ ಬಂದರು. ಇದರಿಂದಾಗಿ ಪಕ್ಷದ ಹಣಕಾಸಿನ ಪರಿಸ್ಥಿತಿಯೂ ಕೊಂಚ ಸುಧಾರಿಸಿತು.

## ನಾಲ್ಕು

ಬಂಗಾಳವು ಕ್ರಾಂತಿಕಾರಿಗಳ ತವರುಮನೆ. ಲಾಹೋರಿನಲ್ಲಿ ತಲೆಮರೆಸಿಕೊಂಡ ಭಗತ್ ಸಿಂಗ್ ಕಲ್ಕತ್ತದಲ್ಲಿ ಕಾಣಿಸಿಕೊಂಡರು. ಅಲ್ಲಿದ್ದ ಸಮಯದಲ್ಲಿ ಅವರು ಅನೇಕ ಕ್ರಾಂತಿ

ಕಾರಿಗಳ ಪರಿಚಯ ಮಾಡಿಕೊಂಡರು. ಆದರೆ ಅವರು ಭಗತ್‌ಸಿಂಗರ ಚಟುವಟಿಕೆಗಳಿಗೆ ಹೆಚ್ಚಿನ ಸಹಾಯಕರಾಗ ಲಿಲ್ಲ. ಯಾಕಂದರೆ ಅವರು ಭಗತ್‌ಸಿಂಗರ ತತ್ವಗಳನ್ನು ಸರಿಯಾಗಿ ಒಪ್ಪುವವರಾಗಿರಲಿಲ್ಲ.

ಆದರೆ ಕಲ್ಕತ್ತದ ಪ್ರವಾಸದಿಂದ ಭಗತ್‌ಸಿಂಗರಿಗೆ ಒಂದು ಪ್ರಯೋಜನವಾಯಿತು. ಕ್ರಾಂತಿಕಾರಿಗಳ ಭಯೋತ್ಪಾದಕ ಚಟುವಟಿಕೆಗಳಿಗೆ ಬಾಂಬಿನ ಸಹಾಯ ಬೇಕಿತ್ತು. ಭಗತ್ ಸಿಂಗ್ ಮತ್ತು ಅವರ ಮಿತ್ರರಿಗೆ ಬಾಂಬ್ ತಯಾರಿಯ ವಿದ್ಯೆ ಗೊತ್ತಿರಲಿಲ್ಲ. ಈ ವಿದ್ಯೆಯನ್ನು ಬಲ್ಲವರು ಬಂಗಾಳದಲ್ಲಿ ಅನೇಕ ಮಂದಿ ಇರುವರೆಂದು ಅವರು ತಿಳಿದಿದ್ದರು. ಅಂಥವ ರನ್ನು ಅವರು ಹುಡುಕತೊಡಗಿದರು. ಕೊನೆಗೆ ಒಬ್ಬ ಯುವ ಕನು ಈ ವಿದ್ಯೆಯನ್ನು ಹೇಳಿಕೊಡಲು ಒಪ್ಪಿದನು. ಈ ಯುವಕನು ಬಂಗಾಳದ ಪ್ರಸಿದ್ಧ ಕ್ರಾಂತಿಕಾರಿ ಜತೀಂದ್ರ ದಾಸನಾಗಿದ್ದನು. ಈತನು, ಮುಂದೆ ನಡೆದ ಅನ್ನ ಸತ್ಯಾಗ್ರಹ ಒಂದರಲ್ಲಿ ಪ್ರಾಣವನ್ನು ಕೊಟ್ಟ ಮಹಾತ್ಯಾಗಿ.

ಇದೇ ಸಮಯದಲ್ಲಿ ಮುಂಬಾಯಿಯಲ್ಲಿ ಗಿರಣಿ ಮಜೂ ರರ ಮತ್ತು ಮಾಲಕರೊಳಗೆ ಹೋರಾಟ ಪ್ರಾರಂಭವಾಗಿತ್ತು. ಭಗತ್‌ಸಿಂಗ್ ಮತ್ತು ಅವರ ಪಕ್ಷದವರ ಸಹಾನುಭೂತಿ ಮಜೂರರ ಕಡೆಗಿತ್ತು. ಆದರೆ ಸರಕಾರ ಮಜೂರರನ್ನು ಸದೆ ಬಡಿಯಲು ನಿಶ್ಚಯಮಾಡಿತ್ತು. ಅದಕ್ಕಾಗಿ ಕೇಂದ್ರ ಶಾಸನ ಸಭೆಯ ಮುಂದೆ ಎರಡು ಮಸೂದೆಗಳು ಬಂದಿದ್ದುವು. ಈಗ ಈ ಮಸೂದೆಗಳಿಗೆ ವಿರೋಧವಾಗಿ ಜನರನ್ನು ಎತ್ತಿಕಟ್ಟುವುದೆ

ಭಗತ್‌ಸಿಂಗರ ಕ್ರಾಂತಿ ಪಕ್ಷದ ಉದ್ದೇಶವಾಗಿತ್ತು. ಜನರ ಮನಸ್ಸನ್ನು ಅತ್ತ ಸೆಳೆಯುವುದಕ್ಕಾಗಿ ಅವರು ಒಂದು ವಿಶೇಷ ಕಾರ್ಯವನ್ನು ಮಾಡಲು ನಿಶ್ಚಯಿಸಿದರು. ಅದೆಂದರೆ, ಈ ಮಸೂದೆಗಳು ಶಾಸನ ಸಭೆಯ ಮುಂದೆ ಚರ್ಚೆಗೆ ಬಂದಾಗ ಅಲ್ಲಿ ಬಾಂಬೆಸೆಯುವುದು. ಬಾಂಬ್ ತಯಾರಿಯ ವಿದ್ಯೆಯನ್ನಂತೂ ಅವರು ಮೊದಲೇ ಕಲಿತುಕೊಂಡಿದ್ದರು!

ಶಾಸನ ಸಭೆಯಲ್ಲಿ ಬಾಂಬೆಸೆಯುವ ಕಾರ್ಯಕ್ಕೆ ಭಗತ್ ಸಿಂಗ್ ಮತ್ತು ಬಟುಕೇಶ್ವರ ದತ್ತ ಎಂಬ ಇನ್ನೊಬ್ಬರು ನೇಮಿಸಲ್ಪಟ್ಟರು. ಬಾಂಬೆಸೆಯಲು ನಿಶ್ಚಯವಾದ ದಿನಕ್ಕೆ ಮೂರು ದಿನಗಳ ಮೊದಲಿನಿಂದ ಅವರು ಪ್ರತಿದಿನ ಶಾಸನ ಸಭೆಗೆ ಹೋಗುತ್ತಿದ್ದರು. ಆದರೆ ಇದೊಂದೂ ಕಾವಲಿದ್ದ ಪೊಲೀಸರಿಗೆ ತಿಳಿದಿರಲಿಲ್ಲ. ಕೊನೆಗೆ, ನಿಶ್ಚಯಿಸಿದ ದಿನ ಬಂತು. ಅದು 1928ರ ಎಪ್ರಿಲ್ 8. ಶಾಸನ ಸಭೆಯಲ್ಲಿ ಮಜೂರ ವಿರೋಧಿ ಮಸೂದೆಯ ಚರ್ಚೆ ನಡೆಯುತ್ತಿತ್ತು. ಒಮ್ಮೆಲೆ ಭಯಂಕರವಾದೊಂದು ಶಬ್ದವಾಯಿತು. ಸಭಾಭವನವನ್ನು ಕಪ್ಪಗಿನ ಹೊಗೆ ಆವರಿಸಿತು. ಸದಸ್ಯರೆಲ್ಲ ಚಕಿತರಾಗಿ ಕಂಡ ಕಂಡಲ್ಲಿ ಓಡತೊಡಗಿದರು. ಆದರೆ ಇಬ್ಬರು ಯುವಕರು ಮಾತ್ರ ಯಾವ ಭಯವೂ ಇಲ್ಲದೆ ಎದೆ ಮುಂದೆ ಮಾಡಿ ನಿಂತಿದ್ದರು. "ಕ್ರಾಂತಿ ಚಿರಾಯುವಾಗಲಿ", "ಬ್ರಿಟಿಷ್ ಸಾಮ್ರಾಜ್ಯಶಾಹಿ ನಾಶವಾಗಲಿ", "ಜಗತ್ತಿನ ಮಜೂರರೇ, ಒಂದಾಗಿ" ಎಂದು ಅವರು ಘೋಷಿಸುತ್ತಿದ್ದರು.

ಪೊಲೀಸರಿಗೆ ಅವರನ್ನು ಬಂಧಿಸಲು ಧೈರ್ಯವಿಲ್ಲ.

ಅವರ ಕೈಯಲ್ಲಿದ್ದ ಪಿಸ್ತೂಲಿಗೆ ಇವರು ಹೆದರಿ ಹೋಗಿದ್ದರು. ಇದನ್ನು ನೋಡಿ ಭಗತ್ ಸಿಂಗ್ ಮತ್ತು ಬಟುಕೇಶ್ವರ ದತ್ತರು ತಾವಾಗಿಯೇ ಪಿಸ್ತೂಲನ್ನು ತೆಗೆದು ದೂರವಿಟ್ಟು, ತಮ್ಮನ್ನು ಯಾವ ತಡೆಯೂ ಇಲ್ಲದೆ ಬಂಧಿಸಬಹುದೆಂದರು. ಇದನ್ನು ನೋಡಿ ಎಲ್ಲರಿಗಿಂತ ಹೆಚ್ಚಾಗಿ ಪೊಲೀಸರು ಅಚ್ಚರಿಗೊಂಡಿರ ಬೇಕು.

ಭಗತ್ ಸಿಂಗ್ ಮತ್ತು ಬಟುಕೇಶ್ವರ ದತ್ತರಿಗೆ ತಮ್ಮ ಕೆಲಸವಾದ ಕೂಡಲೇ ತಲೆತಪ್ಪಿಸಿಕೊಳ್ಳಬಹುದಿತ್ತು. ಆದರೆ ಹಾಗೆ ಮಾಡುವ ಆಲೋಚನೆಯೇ ಅವರಿಗಿರಲಿಲ್ಲ. ಅಥವಾ, ಬಾಂಬೆಸೆದು ಯಾರಿಗಾದರೂ ಅಪಾಯವುಂಟುಮಾಡಬೇಕೆಂ ಬುದೂ ಅವರ ಉದ್ದೇಶವಾಗಿರಲಿಲ್ಲ. ತಮ್ಮಲ್ಲಿದ್ದ ಪಿಸ್ತೂಲಿನ ಸಹಾಯದಿಂದ ಅವರಿಗೆ ಕೆಲವರ ಪ್ರಾಣವನ್ನಾದರೂ ಹಾರಿಸ ಬಹುದಿತ್ತು. ಆದರೆ ಅವರ ಉದ್ದೇಶ ಬೇರೆಯೇ ಆಗಿತ್ತು. ಬಾಂಬೆಸೆಯಬೇಕು; ಅನಂತರ ಪೊಲೀಸರ ಕೈಗೆ ಸಿಗಬೇಕು; ಆ ಮೇಲೆ ವಿಚಾರಣೆಗೆ ಪ್ರಾರಂಭವಾದಾಗ ತಮ್ಮ ಕೃತಿಯನ್ನು ಸಮರ್ಥಿಸಿ, ಕ್ರಾಂತಿ ಪಕ್ಷದ ಧೋರಣೆಯನ್ನು ಲೋಕಕ್ಕೆ ಸ್ಪಷ್ಟವಾಗಿ ಸಾರಬೇಕು. ಕೊನೆಗೆ ತಮ್ಮ ಬಲಿದಾನದಿಂದ ಜನತೆಯಲ್ಲಿ ನವಸ್ಫೂರ್ತಿಯನ್ನು ಹುಟ್ಟಿಸಬೇಕು – ಈ ರೀತಿ ಯಾಗಿ ಮೊದಲೇ ನಿಶ್ಚಯವಾಗಿತ್ತು.

ಸೆಶ್ಯನ್ಸ್ ನ್ಯಾಯಾಲಯದಲ್ಲಿ ಭಗತ್ ಸಿಂಗ್, ಬಟುಕೇ ಶ್ವರ ದತ್ತರ ವಿಚಾರಣೆಯಾಯಿತು. ಕ್ರಾಂತಿಕಾರಿಗಳು ಆತ್ಮ ರಕ್ಷಣೆಗಾಗಿ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಬದಲಾಗಿ,

ನ್ಯಾಯಾಲಯದಲ್ಲಿಯೂ ಅವರು ಕ್ರಾಂತಿ ಸಂದೇಶವನ್ನು ಸಾರಿದರು. ಬಾಂಬೆಸೆದವರು ತಾವೇ ಎಂಬುದನ್ನು ಅವರು ಒಪ್ಪಿಕೊಂಡು, ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಎಚ್ಚರಿಸುವುದಕ್ಕಾಗಿ ತಾವು ಹೀಗೆ ಮಾಡಿದೆವು ಎಂದು ತಮ್ಮ ಕೃತಿಯನ್ನು ಸಮರ್ಥಿಸಿಕೊಂಡರು. ಅವರಿಗೆ ಜೀವ ಕ್ಷಣಿಕವಾಗಿತ್ತು; ಕ್ರಾಂತಿಯೊಂದೇ ಚಿರಾಯುವಾಗಿತ್ತು.

ಆಳರಸರ ನ್ಯಾಯಾಲಯ ಈ ಕ್ರಾಂತಿವೀರರಿಗೆ ಜೀವಾವಧಿ ಶಿಕ್ಷೆ ವಿಧಿಸಿತು.

## ಐದು

ವ್ಯಕ್ತಿಗಳನ್ನು ಬಂಧಿಸಬಹುದು; ಶಿಕ್ಷೆ ಕೊಡಬಹುದು. ಆದರೆ ಕ್ರಾಂತಿ ತತ್ವವನ್ನು ಬಂಧಿಸಿಡುವುದು ಸಾಧ್ಯವಿಲ್ಲ. ಕಬ್ಬಿಣದ ಸರಳುಗಳು ಕೂಡ ಅದನ್ನು ತಡೆಹಿಡಿಯಲಾರವು.

ಭಗತ್‌ಸಿಂಗ್, ಬಟುಕೇಶ್ವರ ದತ್ತರು ತುರಂಗದೊಳಗೆ ಕೂಡ ಕ್ರಾಂತಿಯ ಕಹಳೆಯೂದಿದರು. ಈ ಕ್ರಾಂತಿಕಾರಿಗಳನ್ನು ಸೆರೆಮನೆಯಲ್ಲಿ ಮನುಷ್ಯರಂತೆ ಕಾಣುತ್ತಿದ್ದಿಲ್ಲ. ತುರಂಗದ ಅಧಿಕಾರಿಗಳು ಅವರನ್ನು ನಡೆಸಿಕೊಳ್ಳುತ್ತಿದ್ದ ಕ್ರಮ ಅಸಹ್ಯವಾಗಿತ್ತು. ಅವರಿಗೆ ಯೋಗ್ಯವಾದ ಆಹಾರ ಕೂಡ ದೊರೆಯುತ್ತಿರಲಿಲ್ಲ. ಇದನ್ನು ಪ್ರತಿಭಟಿಸಿ ಅವರು ಜೂನ್ 15ರಿಂದ ಅನ್ನಸತ್ಯಾಗ್ರಹ ಕೈಕೊಂಡರು.

ಉಪವಾಸ ವ್ರತ ಸಾಗಿಯೇ ಇತ್ತು. ಅಷ್ಟರಲ್ಲಿ ಲಾಹೋರ್ ಒಳಸಂಚಿನ ಮೊಕದ್ದಮೆ (ಸ್ಯಾಂಡರ್ಸ್ ಕೊಲೆಯ ಪ್ರಕರಣ) ಯಲ್ಲಿ ಅವರ ವಿಚಾರಣೆ ಪ್ರಾರಂಭ

ವಾಯಿತು. ಈ ಮೊಕದ್ದಮೆಯಲ್ಲಿ ಹದಿಮೂರು ಜನ ಆಪಾದಿತರಿದ್ದರು. ಭಗತ್‌ಸಿಂಗರ ಸಂಗಾತಿಗಳಾದ ಸುಖದೇವ, ರಾಜಗುರು, ಜತಿನ್‌ದಾಸ್, ಅಜಯಘೋಷ್, ಶಿವವರ್ಮ ಅವರಲ್ಲಿ ಪ್ರಮುಖರು. ಜುಲಾಯಿ 10ರಂದು ಇವರೆಲ್ಲರೂ ನ್ಯಾಯಾಲಯದಲ್ಲಿ ಸಂಧಿಸಿದರು. ಭಗತ್‌ಸಿಂಗ್ ಹಲವು ದಿನಗಳ ಉಪವಾಸದಿಂದಲೂ ಪೊಲೀಸರ ಚಿತ್ರಹಿಂಸೆಯಿಂದಲೂ ನಿರ್ಬಲರಾಗಿದ್ದರು. ಸ್ಟ್ರೆಚರಿನಲ್ಲಿಯೇ ಅವರನ್ನು ನ್ಯಾಯಾಲಯಕ್ಕೆ ತರಬೇಕಾಯಿತು. ಅವರ ಸ್ಥಿತಿಯನ್ನು ನೋಡಿ ಇತರ ಕ್ರಾಂತಿಕಾರಿಗಳು ಮರುಗಿದರು. ಜುಲಾಯಿ 12ರಿಂದ ಅವರೂ ಅನ್ನ ಸತ್ಯಾಗ್ರಹ ಪ್ರಾರಂಭಿಸಿದರು.

ಈ ಅನ್ನ ಸತ್ಯಾಗ್ರಹ ಇತಿಹಾಸದಲ್ಲೇ ಅತ್ಯಂತ ಪ್ರಸಿದ್ಧವಾದುದು. ಕ್ರಾಂತಿಕಾರಿಗಳ ಉಪವಾಸ ವ್ರತವನ್ನು ಮುರಿಯಬೇಕೆಂದು ಜೈಲಿನ ಅಧಿಕಾರಿಗಳು ಎಲ್ಲ ಪ್ರಯತ್ನಗಳನ್ನೂ ಮಾಡಿದರು. ಎಂಟು-ಹತ್ತು ಜನರು ಕೂಡಿಕೊಂಡು ಬಲಾತ್ಕಾರದಿಂದ ಮೂಗಿನ ಮೂಲಕವೋ ಬಾಯಿಯ ಮೂಲಕವೋ ಆಹಾರ ಕೊಡಲು ಯತ್ನಿಸಿದರು; ಹಲವು ರೀತಿಯ ಚಿತ್ರಹಿಂಸೆಗಳನ್ನು ಕೊಟ್ಟರು. ಆದರೆ ಕ್ರಾಂತಿ ವೀರರ ದೃಢ ನಿರ್ಧಾರವನ್ನು ಮುರಿಯುವುದು ಅವರಿಂದಾಗಲಿಲ್ಲ.

ಕ್ರಾಂತಿಕಾರಿಗಳು ಅನುಭವಿಸಬೇಕಾಗಿ ಬಂದ ರೌರವ ನರಕದ ಕುರಿತು, ಕೈದಿಗಳಲ್ಲೊಬ್ಬರಾದ ಅಜಯಘೋಷ್ ತಮ್ಮ "ಭಗತ್‌ಸಿಂಗ್ ಮತ್ತು ಅವನ ಸಂಗಾತಿಗಳು" ಎಂಬ ಚಿಕ್ಕ ಹೊತ್ತಿಗೆಯಲ್ಲಿ ಹೃದಯವಿದ್ರಾವಕ ವರ್ಣನೆಯನ್ನು ಕೊಟ್ಟಿದ್ದಾರೆ.

ಉಪವಾಸ ಮುಷ್ಕರ ಪ್ರಾರಂಭವಾಗಿ ಮೂರು ವಾರವಾಗಿತ್ತು. ಅಷ್ಟರಲ್ಲೇ ಕೈದಿಗಳಲ್ಲಿ ಕೆಲವರ ಪರಿಸ್ಥಿತಿ ಹದಮೀರಿತ್ತು. ಜತಿನ್ ದಾಸರ ಸ್ಥಿತಿಯಂತೂ ಚಿಂತಾಜನಕವಾಯಿತು. ಗಳಿಗೆಯಿಂದ ಗಳಿಗೆಗೆ ಅವರು ನಿರ್ಬಲರಾಗುತ್ತಿದ್ದರು. ಮಾತಾಡುವುದು ಕಷ್ಟವಾಯಿತು; ಕಣ್ಣು ಬಿಡಿಸುವುದು ಅಸಾಧ್ಯವಾಯಿತು; ಬುದ್ಧಿಯ ಸ್ಥಿಮಿತ ಕೂಡ ತಪ್ಪಿಹೋಯಿತು.

ಈ ಸುದ್ದಿ ಕಿಚ್ಚಿನಂತೆ ದೇಶದಲ್ಲೆಲ್ಲ ಹರಡಿತು. ಮೂಲೆಮೂಲೆಗಳಲ್ಲಿ ಜನರು ಸಭೆ ಸೇರಿ ಸರಕಾರದ ವರ್ತನೆಯನ್ನು ಖಂಡಿಸಿದರು. ಕೈದಿಗಳ ಬಗ್ಗೆ ಜನತೆಗಿದ್ದ ಸಹಾನುಭೂತಿಯನ್ನು ನೋಡಿ ಸರಕಾರ ದಿಗಿಲುಗೊಂಡಿತು. ಅದು ಜನತೆಯ – ಕೈದಿಗಳ – ಬೇಡಿಕೆಗಳಿಗೆ ಬಾಗಲೇ ಬೇಕಾಯಿತು. ಸೆಪ್ಟೆಂಬರ 2ರಂದು, ಕೈದಿಗಳ ಬೇಡಿಕೆಗಳನ್ನು ಪರಿಶೀಲಿಸಲು ವಿಚಾರಣಾ ಸಮಿತಿಯನ್ನು ನೇಮಿಸಲಾಗುವುದೆಂದು ಸರಕಾರ ಘೋಷಿಸಿತು.

ಕೈದಿಗಳು ಅನ್ನ ಸತ್ಯಾಗ್ರಹ ನಿಲ್ಲಿಸಿದರು. ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ತರು ಆಗಲೇ 81 ದಿನಗಳನ್ನು ಮುಗಿಸಿದ್ದರು. ಉಳಿದವರು ಉಪವಾಸ ಪ್ರಾರಂಭಿಸಿ 51 ದಿನವಾಗಿತ್ತು. ಆದರೆ ಕೈದಿಗಳು ತಮ್ಮ ವಿಜಯದಿಂದ ಸಂತೋಷಗೊಳ್ಳುವ ಹಾಗಿರಲಿಲ್ಲ. ಅವರ ನೆಚ್ಚಿನ ಜತಿನ್ ಮರಣಶಯ್ಯೆಯಲ್ಲಿದ್ದರು. ಕೈದಿಗಳು ಉಪವಾಸ ನಿಲ್ಲಿಸುವ ಒಂದು ಶರ್ತ ಜತಿನ್ ದಾಸರನ್ನು ಕೂಡಲೆ ಯಾವ ಕರಾರೂ ಇಲ್ಲದೆ

ಬಿಡುಗಡೆ ಮಾಡಬೇಕೆಂಬುದಾಗಿತ್ತು. ಆದರೆ ಸರಕಾರ ಮಾತಿನಂತೆ ನಡೆಯಲಿಲ್ಲ; ಜಾಮೀನಿಲ್ಲದೆ ಜತಿನ್‌ದಾಸರನ್ನು ಬಿಡುಗಡೆ ಮಾಡುವುದು ಸಾಧ್ಯವಿಲ್ಲವೆಂದು ನಿರ್ದಯೆಯಿಂದ ನುಡಿಯಿತು. ಭಗತ್‌ಸಿಂಗ್ ಮತ್ತು ಇತರರು ಪುನಃ ಅನ್ನ ಸತ್ಯಾಗ್ರಹ ಪ್ರಾರಂಭಿಸಿದರು. ನ್ಯಾಯಾಲಯದಲ್ಲಿ ಭಗತ್ ಸಿಂಗರೇ ಸ್ವತಃ ಜತಿನರ ಬಿಡುಗಡೆಯ ಬಗ್ಗೆ ವಾದಿಸಿದರು. ದೇಶಕ್ಕೆ ದೇಶವೇ ಅವರ ಸ್ಥಿತಿಯಿಂದ ವ್ಯಾಕುಲಗೊಂಡಿತ್ತು. ಆದರೆ ಬಿಳಿಯ ಸಾಮ್ರಾಜ್ಯಶಾಹಿಯ ಉಕ್ಕಿನ ಹೃದಯ ಮಾತ್ರ ಕರಗಲಿಲ್ಲ.

ಸೆಪ್ಟಂಬರ 13. ಜತಿನರ ಸ್ಥಿತಿಯ ಸುದ್ದಿ ಕೇಳುವುದಕ್ಕಾಗಿ ಸೆರೆಮನೆಯ ಮುಂದೆ ಸಾವಿರಾರು ಜನರು ಸೇರಿದ್ದಾರೆ. ಮಧ್ಯಾಹ್ನ ಒಂದು ಗಂಟೆ ಐದು ನಿಮಿಷ ಕಳೆಯುವಾಗ ಸುದ್ದಿ ಬಂತು–ಜತಿನ್ ಇನ್ನಿಲ್ಲ!

ಜತಿನರ ದೇಹತ್ಯಾಗ ಫಲವನ್ನು ಕೊಡದೆ ಇರಲಿಲ್ಲ. ವಿಚಾರಣಾ ಸಮಿತಿಯು ಕೈದಿಗಳ ಅನೇಕ ಕೇಳಿಕೆಗಳನ್ನು ಮಾನ್ಯಮಾಡುವಂತೆ ವರದಿಮಾಡಿತು. ಆ ವರದಿಯನ್ನು ಸರಕಾರ ಕಾರ್ಯಗತಮಾಡಬೇಕಾದರೆ ಕೈದಿಗಳು ಮತ್ತೆರಡು ವಾರಗಳ ಅನ್ನಸತ್ಯಾಗ್ರಹ ಹೂಡಬೇಕಾಯಿತು!

## ಆರು

ಅನ್ನಸತ್ಯಾಗ್ರಹವು ಕೊನೆಗೊಂಡ ಬಳಿಕ ಲಾಹೋರ್ ಒಳಸಂಚಿನ ಮೊಕದ್ದಮೆಯ ವಿಚಾರಣೆ ಪುನಃ ಪ್ರಾರಂಭವಾಯಿತು. ಭಗತ್‌ಸಿಂಗ್ ಮತ್ತು ಅವರ ಸಂಗಾತಿಗಳು ಪ್ರತಿ

ಯೊಂದು ಸಂದರ್ಭವನ್ನೂ ಕ್ರಾಂತಿ ತತ್ವದ ಪ್ರಚಾರಕ್ಕಾಗಿ ಉಪಯೋಗಿಸಿಕೊಳ್ಳುತ್ತಿದ್ದರು. ಹಿಂದಿನಂತೆ ಈಗಲೂ ಅವರು ಆತ್ಮರಕ್ಷಣೆಗಾಗಿ ನ್ಯಾಯಾಲಯದಲ್ಲಿ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಹಜ್ಜೆಹಜ್ಜೆಗೂ ಅವರು ತಮ್ಮ ಧೋರಣೆಯನ್ನು ಸಮರ್ಥಿಸಿಕೊಂಡರು. ನ್ಯಾಯಾಧೀಶರ ಮುಂದೆ ಅವರು ಆಡಿದ ಮಾತುಗಳು ತರುಣರಿಗೆ ಸ್ಫೂರ್ತಿಕೊಡುವ ಸಂದೇಶಗಳಾಗಿದ್ದುವು. ಅವನ್ನು ಕೇಳಲು ನೂರಾರು ಯುವಕ ಯುವತಿಯರು ಬರುತ್ತಿದ್ದರು. ವಿಚಾರಣೆಯಿಂದ ಕ್ರಾಂತಿಕಾರರ ಕೀರ್ತಿ ಹರಡಿತು; ಅವರ ಬಗ್ಗೆ ಜನತೆಗಿದ್ದ ಅಭಿಮಾನ –ಸಹಾನುಭೂತಿ ಹೆಚ್ಚಿತು.

ನ್ಯಾಯಾಲಯದಲ್ಲಿ ಒಮ್ಮೆ ಒಂದು ಘಟನೆ ನಡೆಯಿತು. ಪೊಲೀಸರು ಬಂದಿಗಳ ಕೈಗಳಿಗೆ ಬೇಡಿ ತೊಡಿಸಲು ಬಂದಾಗ ಅವರು ನಿರಾಕರಿಸಿದರು. ಸಿಟ್ಟಿಗೆದ್ದ ಪೊಲೀಸರು ನಿರ್ದಯೆಯಿಂದ ಅವರ ಮೇಲೆ ಬಿದ್ದರು. ಲಾಠಿ ಪೆಟ್ಟುಗಳ ಸುರಿಮಳೆಯಾಯಿತು. ಅರೆಂಟು ಜನ ಪಠಾಣರು ಭಗತ್‌ಸಿಂಗರ ಮೇಲೆ ಬಿದ್ದು ಚೆನ್ನಾಗಿ ಥಳಿಸಿದರು. ನ್ಯಾಯಾಲಯದಲ್ಲಿದ್ದ ಪ್ರೇಕ್ಷಕರು ಇದನ್ನು ಮೂಕರಂತೆ ನೋಡುತ್ತ ನಿಲ್ಲಬೇಕಾಯಿತು. ಆದರೆ ಕ್ರಾಂತಿಕಾರಿಗಳು ಈ ಮೂಲಕವೂ ತಮ್ಮ ತತ್ವಪ್ರಚಾರದ ಉದ್ದೇಶವನ್ನು ಸಾಧಿಸಿದರು. ಜನರಿಗೆ ಬ್ರಿಟಿಷ್ ಸಾಮ್ರಾಜ್ಯಶಾಹಿಯ ಮೇಲಿನ ದ್ವೇಷ ಹೆಚ್ಚಿತು; ಆ ಕ್ರೂರ ರಾಕ್ಷಸನನ್ನು ನಾಶಗೊಳಿಸಿ ದೇಶದ ಸ್ವಾತಂತ್ರ್ಯವನ್ನು ಸಾಧಿಸುವ ಪ್ರತಿಜ್ಞೆಯನ್ನು ಆಗಲೇ ಅವರು ಕೈಕೊಂಡರು.

ಇಷ್ಟೆಲ್ಲ ಅನಾಚಾರ ನಡೆಸಿಯೂ ಪೊಲೀಸರಿಗೆ ಕೈದಿಗಳನ್ನು ಅಂಕೆಗೆ ತರುವುದು ಸಾಧ್ಯವಾಗಲಿಲ್ಲ. ಕೊನೆಗೆ ನ್ಯಾಯಾಧೀಶರು ಅವರಿಗೆ ಬೇಡಿ ಹಾಕದೆಯೇ ನ್ಯಾಯಾಲಯಕ್ಕೆ ತರಲು ಸಮ್ಮತಿಯೀಯಬೇಕಾಯಿತು.

ಲಾಹೋರ್ ಮೊಕದ್ದಮೆಯ ವಿಚಾರಣೆ ಇಷ್ಟರಲ್ಲೇ ಇಡೀ ಜಗತ್ತಿನ ಲಕ್ಷ್ಯವನ್ನು ಸೆಳೆದಿತ್ತು. ಎಲ್ಲಿ ನೋಡಿದರೂ ಭಗತ್‌ಸಿಂಗ್ ಬಂಧುಗಳ ಮಾತೇ ಮಾತು. ಪ್ರತಿಯೊಬ್ಬ ಸ್ವಾತಂತ್ರ್ಯಪ್ರಿಯ ಭಾರತೀಯನ ಹೃದಯದಲ್ಲಿಯೂ ಅವರಿಗೆ ಅಭಿಮಾನದ–ಸಹಾನುಭೂತಿಯ ಸ್ಥಾನವಿತ್ತು.

ಈ ವಿಚಾರಣೆ ಸರಕಾರ ಏನನ್ನು ಬಯಸಿತ್ತೋ ಅದಕ್ಕೆ ವಿರೋಧವಾದ ಪರಿಣಾಮವನ್ನೇ ಕೊಟ್ಟಿತು. ಭಾರತದ ರಾಜಕೀಯ ರಂಗದಲ್ಲಿ ಕ್ರಾಂತಿಕಾರಿಗಳ ಪ್ರಭಾವ ಇಲ್ಲದಂತೆ ಮಾಡುವುದು ಸರಕಾರದ ಉದ್ದೇಶವಾಗಿತ್ತು. ಆದರೆ ವಿಚಾರಣೆಯ ಪರಿಣಾಮವಾಗಿ ಹೆಚ್ಚೆಚ್ಚು ಯುವಕ ಯುವತಿಯರು ಕ್ರಾಂತಿ ತತ್ವದೆಡೆಗೆ ಬರುವುದನ್ನು ನೋಡಿ ಸರಕಾರ ದಿಗಿಲುಗೊಂಡಿತು. ಅಂತಹ ಪರಿಸ್ಥಿತಿಯಲ್ಲಿ ಸರಕಾರ ಯಾವ ನಿರ್ಲಜ್ಜ ಕೆಲಸಕ್ಕೂ ಹೇಸುವಂತಿಲ್ಲ. ಸ್ಪೆಶಲ್ ಮೆಜಿಸ್ಟ್ರೇಟರ ಮುಂದೆ ನಡೆಯುತ್ತಿದ್ದ ವಿಚಾರಣೆಯನ್ನು ಒಮ್ಮೆಲೇ ನಿಲ್ಲಿಸಲಾಯಿತು. ವೈಸರಾಯರು ಸುಗ್ರೀವಾಜ್ಞೆಯೊಂದನ್ನು ಹೊರಡಿಸಿ, ಅವರ ವಿಚಾರಣೆಗಾಗಿ ವಿಶೇಷ ನ್ಯಾಯಾಲಯವೊಂದನ್ನು ನೇಮಿಸಿದರು.

ವಿಶೇಷ ನ್ಯಾಯಾಲಯದಲ್ಲಿ ಕೆಳಗಿನ ನ್ಯಾಯಾಲಯದಲ್ಲಿ ನಡೆದ ಘಟನೆಗಳೇ ಪುನರಾವರ್ತನೆಗೊಂಡುವು. ನ್ಯಾಯ

ಸ್ಥಾನದಲ್ಲಿ ಜಯಕಾರ ಮಾಡಿದುದಕ್ಕಾಗಿ ಕೈದಿಗಳಿಗೆ ಬೇಡಿತೊಡಿಸಬೇಕೆಂದು ಮುಖ್ಯ ನ್ಯಾಯಾಧೀಶರು ಆಜ್ಞೆಕೊಟ್ಟರು. ಆದರೆ ಕೈದಿಗಳು ಬೇಡಿತೊಡಿಸಿಕೊಳ್ಳಲು ನಿರಾಕರಿಸಿದರು. ಪುನಃ ಅದೇ ದಬ್ಬಾಳಿಕೆ–ಲಾಠಿಯ ಪೆಟ್ಟು, ಕಾಲಿನ ಒದೆತ. ಕೈದಿಗಳಿಗೆ ಮಾತ್ರ ಬೇಡಿತೊಡಿಸುವುದಿರಲಿ, ಬಿಳಿಯ ಆಳರಸರು ನ್ಯಾಯ ದೇವತೆಯನ್ನೇ ಬೇಡಿತೊಡಿಸಿ ಬಂಧನದಲ್ಲಿರಿಸಿದ್ದರು! ನ್ಯಾಯಾಲಯದಲ್ಲಿ ನಡೆದ ಈ ಕ್ರೂರ ದೃಶ್ಯವನ್ನು ನೋಡಿ ನ್ಯಾಯಮಂಡಲಿಯ ಒಬ್ಬರೇ ಒಬ್ಬರು ಹಿಂದೀ ಸದಸ್ಯರಾದ ಹೈದರ್ ಬಹಳ ವ್ಯಸನಪಟ್ಟರು. ಅಂತಹ ಅನಾಚಾರಕ್ಕೆ ತಮ್ಮ ಸಮ್ಮತಿಯಿಲ್ಲವೆಂದು ಒಂದು ಹೇಳಿಕೆ ಹೊರಡಿಸಿದರು. ಮರುದಿನ ಹೈದರರ ಹೆಸರು ನ್ಯಾಯಮಂಡಲಿಯಲ್ಲಿರಲಿಲ್ಲ. ಪೂರ್ಣ ಬಿಳಿಜನರಿಂದಲೇ ತುಂಬಿದ ನ್ಯಾಯಮಂಡಲಿಯು ನೇಮಕವಾಗಿತ್ತು!!

ಈ ನ್ಯಾಯಮಂಡಲಿ ಪ್ರಜಾಪ್ರಭುತ್ವದ ಹೆಸರಿಗೆ ಕೂಡ ಕಳಂಕವಾಗಿತ್ತು. ಅದರ ಮುಂದೆ ವಾದಿಸಲು ವಕೀಲರು ಬೇಕಿರಲಿಲ್ಲ; ಸಾಕ್ಷಿಗಳ ಅವಶ್ಯವಿದ್ದಿಲ್ಲ; ಆರೋಪಿಗಳು ಕೂಡ ಬರಬೇಕೆಂದಿರಲಿಲ್ಲ! ಹೀಗೆ ವಿಚಾರಣೆಯ ಕಪಟ ನಾಟಕ ಐದು ತಿಂಗಳ ವರೆಗೆ ನಡೆದು, ಕೊನೆಗೆ 1930ನೇ ಅಕ್ಟೋಬರ 7ರಂದು ನ್ಯಾಯಾಧೀಶರ ಏಕಪಕ್ಷೀಯ ತೀರ್ಮಾನ ಬಂತು. ಅದೇನೆಂದು ಜನ ಮೊದಲೇ ಊಹಿಸಿತ್ತು – ಭಗತ್‌ಸಿಂಗ್, ಸುಖದೇವ, ರಾಜಗುರು ಇವರಿಗೆ ಮರಣದಂಡನೆ!

ಮರಣದಂಡನೆಯನ್ನು ರದ್ದುಗೊಳಿಸಬೇಕೆಂದು ದೇಶಕ್ಕೆ ದೇಶವೇ ಆಂದೋಲನ ನಡೆಸಿತು. ಗಾಂಧಿಜಿ ಕೂಡ ಭಗತ್‌ಸಿಂಗ್ ಬಂಧುಗಳಿಗಾದ ಮರಣದಂಡನೆಯನ್ನು ರದ್ದುಗೊಳಿಸಲು

ತಮ್ಮಿಂದಾದ ಪ್ರಯತ್ನ ಮಾಡಿದರು. ಸರಕಾರ ಈ ಸ್ವಾತಂತ್ರ್ಯ ಯೋಧರ ಜೀವವುಳಿಸಬಹುದೆಂಬ ಆಶೆಯಿಂದ ಸಾಮೂಹಿಕ ಚಳವಳವನ್ನು ಹಿಂತೆಗೆದುಕೊಂಡು ಸರಕಾರದೊಡನೆ ಒಂದು ಒಪ್ಪಂದಕ್ಕೆಕೂಡ ಬಂದರು. ಆದರೆ ಭಗತ್ ಸಿಂಗ್ ಮತ್ತು ಅವರ ಅನುಯಾಯಿಗಳ ಜೀವವುಳಿಸುವುದೆಂದರೆ ಸರಕಾರ ತನ್ನ ಸೋಲನ್ನು ಬಹಿರಂಗವಾಗಿ ಒಪ್ಪಿಕೊಂಡಂತೆ! ಅದಕ್ಕೆ ಸಾಮ್ರಾಜ್ಯಶಾಹಿ ಸಿದ್ಧವಿರಲಿಲ್ಲ.

ಸಾವಿರದ ಒಂಬೈನೂರ ಮೂವತ್ತೊಂದು, ಮಾರ್ಚ್ 23. ಅತ್ತ ಸೂರ್ಯ ಆಗತಾನೆ ಪಶ್ಚಿಮಕ್ಕಿಳಿಯುತ್ತಿದ್ದ. ಇತ್ತ ಕ್ರಾಂತಿವೀರರಿಗಾಗಿ ನೇಣುಗಳು ಕಾದಿದ್ದುವು. "ಕ್ರಾಂತಿ ಚಿರಾಯುವಾಗಲಿ", "ಸಾಮ್ರಾಜ್ಯಶಾಹಿ ನಾಶವಾಗಲಿ" ಎಂದು ಘೋಷಿಸುತ್ತ ಭಾರತದ ಈ ಮೂವರು ಸುಪುತ್ರರು ನೇಣುಗಂಬದತ್ತ ನಡೆದರು. ಅವರಲ್ಲಿ ಭಯವಿರಲಿಲ್ಲ; ಅಳುಕು ಇರಲಿಲ್ಲ; ದೇಶಕ್ಕಾಗಿ ಪ್ರಾಣವರ್ಪಿಸುವ ಸುಯೋಗ ತಮಗೆ ದೊರೆಯಿತಲ್ಲ ಎಂಬುದೇ ಅವರಿಗೆ ಎಲ್ಲದಕ್ಕಿಂತ ಹೆಚ್ಚಿನ ಸಂತೋಷ. "ಕ್ರಾಂತಿಯು ಚಿರಾಯುವಾಗಲಿ" ಎಂದು ಘೋಷಿಸುತ್ತಲೇ ಅವರು ಉರುಳಿಗೆ ಕೊರಳೊಡ್ಡಿದರು. ಮತ್ತೆ ಸ್ವಲ್ಪ ಹೊತ್ತಿನಲ್ಲಿ 'ಧಡ್' ಎಂದು ಹಲಗೆ ಬಿದ್ದ ಶಬ್ದ ಕೇಳಿಸಿತು; ಘೋಷಣೆಗಳು ನಿಂತುವು; ಕ್ರಾಂತಿವೀರರ ಪ್ರಾಣಪಕ್ಷಿಗಳು ಹಾರಿಹೋಗಿದ್ದುವು. ಆದರೆ ಸೆರೆಮನೆಯಲ್ಲಿ ಎಲ್ಲೆಲ್ಲಿಯೂ "ಕ್ರಾಂತಿಯು ಚಿರಾಯುವಾಗಲಿ" ಎಂಬ ಘೋಷಣೆ ಪ್ರತಿಧ್ವನಿಸುತ್ತಿತ್ತು. ದೇಶವಿಡೀ ಹಿಮಾಲಯದಿಂದ ಕನ್ಯಾಕುಮಾರಿಯ ವರೆಗೆ "ಸಾಮ್ರಾಜ್ಯಶಾಹಿ ನಾಶವಾಗಲಿ" ಎಂದು ಸಾರುತ್ತಿತ್ತು.

## ಏಳು

ಭಗತ್‌ಸಿಂಗರಿಗೆ ಕ್ರಾಂತಿಯಲ್ಲಿ ಅಪಾರ ವಿಶ್ವಾಸವಿತ್ತು. "ಕ್ರಾಂತಿ ಜಗತ್ತಿನ ನಿಯಮ. ಮಾನವ ಪ್ರಗತಿಯ ರಹಸ್ಯ ಅದರಲ್ಲಿದೆ" ಎಂದು ಅವರು ಹೇಳುತ್ತಿದ್ದರು.

ಈ ಕ್ರಾಂತಿಕಾರಿಗಳು ಕೇವಲ ಬಂಡಾಯಗಾರರು; ಕೊಲೆಗಡುಕರು ಎಂದು ಹೇಳುವವರು ಇರಲೂ ಬಹುದು. ಆದರೆ ಮನುಷ್ಯ ಜೀವವನ್ನು ಅವರು ಎಷ್ಟು ಪವಿತ್ರವಾಗಿ ಗಣಿಸಿದ್ದರೆಂಬುದು ಭಗತ್‌ಸಿಂಗ್ ಮತ್ತು ಬಟುಕೇಶ್ವರ ದತ್ತರು ನ್ಯಾಯಾಲಯದ ಮುಂದೆ ಇತ್ತ ಹೇಳಿಕೆಯಿಂದ ಸ್ಪಷ್ಟವಾಗುವುದು. "ಮನುಷ್ಯ ಜೀವಗಳು ಅತ್ಯಂತ ಪವಿತ್ರವಾದವುಗಳೆಂದು ನಾವು ತಿಳಿಯುತ್ತೇವೆ. ಪರರಿಗೆ ಅನ್ಯಾಯ ಮಾಡುವುದಕ್ಕಿಂತ ಮಾನವತೆಯ ಸೇವೆಯಲ್ಲಿ ನಮ್ಮ ಜೀವವನ್ನೇ ಅರ್ಪಣೆ ಮಾಡಲು ಸಿದ್ಧರಿದ್ದೇವೆ. ಕರುಣೆಯು ತೃಣಮಾತ್ರವಿರದ, ಕೊಲ್ಲುವುದೊಂದರಲ್ಲೇ ಪರಿಣತರಾದ ಸಾಮ್ರಾಜ್ಯಶಾಹಿಗಳ ಸಂಬಳದ ಸೈನಿಕರ ಹಾಗಲ್ಲ ನಾವು. ನಾವು ಮಾನವತೆಯನ್ನು ಗೌರವಿಸುವುದು ಮಾತ್ರವಲ್ಲ, ಮನುಷ್ಯ ಜೀವಗಳನ್ನು ರಕ್ಷಿಸಲೂ ಪ್ರಯತ್ನಗಳನ್ನು ಮಾಡುತ್ತೇವೆ."

ಸ್ಯಾಂಡರ್ಸನ ಕೊಲೆಯಾದ ಮೇಲೆ ಕ್ರಾಂತಿ ಪಕ್ಷದವರು ಹೊರಡಿಸಿದ ಪ್ರಕಟಣೆಯಿಂದ ಈ ಅಭಿಪ್ರಾಯದ ಸ್ಪಷ್ಟವಾದ ಅರ್ಥವಾಗುವುದು. "ಒಂದು ವ್ಯಕ್ತಿಯನ್ನು ಕೊಂದೆವೆಂದು ನಾವು ವ್ಯಸನಪಡುತ್ತೇವೆ. ಆದರೆ ಆ ವ್ಯಕ್ತಿ, ನಾಶಯೋಗ್ಯವಾದ ಅಮಾನುಷ ಮತ್ತು ಅನ್ಯಾಯದ ಆಡಳಿತೆ

ಯೊಂದರ ಪ್ರತಿನಿಧಿಯಾಗಿತ್ತು. ಅವನ ಕೊಲೆಯಿಂದ ಬ್ರಿಟಿಷ್ ಸರಕಾರದ ಒಬ್ಬ ಏಜಂಟನನ್ನು ಕೊನೆಗಾಣಿಸಿದಂತಾಗಿದೆ. ಮನುಷ್ಯನ ನೆತ್ತರನ್ನು ಚೆಲ್ಲುವುದೆಂದರೆ ನಮಗೆ ದುಃಖವಾಗುವುದು. ಆದರೆ ಕ್ರಾಂತಿಯ ಪೂಜಾಮಂಟಪದಲ್ಲಿ ರಕ್ತ ಚೆಲ್ಲುವುದು ಅನಿವಾರ್ಯವಾದುದು. ಮನುಷ್ಯನು ಮನುಷ್ಯನನ್ನು ಶೋಷಿಸುವುದನ್ನು ಕೊನೆಗಾಣಿಸುವ ಕ್ರಾಂತಿಯನ್ನು ಸಾಧಿಸುವುದೇ ನಮ್ಮ ಗುರಿ."

ಅಹಿಂಸೆ ಈ ಕ್ರಾಂತಿಕಾರಿಗಳ ಧರ್ಮವಾಗಿರಲಿಲ್ಲ; ಅಥವಾ ಹಿಂಸೆಯೂ ಅಲ್ಲ. ಸ್ವಾತಂತ್ರ್ಯವನ್ನು ಗಳಿಸಬೇಕಾದರೆ ಆತ್ಮಶಕ್ತಿ ಮತ್ತು ದೇಹಶಕ್ತಿ ಎರಡನ್ನೂ ಉಪಯೋಗಿಸುವುದು ಅವಶ್ಯ ಎಂದು ಅವರು ನಂಬಿದ್ದರು. "ಶಕ್ತಿಯನ್ನು ಆಕ್ರಮಣಕ್ಕಾಗಿ ಉಪಯೋಗಿಸಿದರೆ ಅದು ಹಿಂಸೆಯಾಗುವುದು; ನೈತಿಕವಾಗಿ ಅದನ್ನು ಸಮರ್ಥಿಸುವುದು ಸಾಧ್ಯವಿಲ್ಲ. ಆದರೆ ನ್ಯಾಯುವಾದ ಕಾರಣಕ್ಕಾಗಿ ಬಲ ಪ್ರಯೋಗಮಾಡಿದರೆ ಅದಕ್ಕೆ ನೈತಿಕ ಸಮರ್ಥನೆಯಿದೆ."

ಭಗತ್‌ಸಿಂಗ್ ಪರಿಪೂರ್ಣ ಮಾರ್ಕ್ಸ್‌ವಾದಿಯಾಗಿದ್ದಿರಲಾರರು. ಆದರೆ ಅವರ ಮನಸ್ಸು ಮಾರ್ಕ್ಸ್‌ವಾದದತ್ತ, ಸಮಾಜವಾದದತ್ತ ಹೋಗುತ್ತಿತ್ತು. "ಕ್ರಾಂತಿಯೆಂದರೆ ಅಗಣಿತ ಅನ್ಯಾಯದ ಮೇಲೆ ನಿಂತ ಇಂದಿನ ಸಮಾಜ ಪದ್ಧತಿಯನ್ನು ನಿರ್ನಾಮಮಾಡುವುದು. ಇಂದು ಶ್ರಮಜೀವಿಗಳು ಸಮಾಜದಲ್ಲಿ ಅತ್ಯಂತ ಪ್ರಮುಖ ವರ್ಗವಾಗಿದ್ದರೂ, ಶೋಷಣೆಗಾರರು ಅವರ ದುಡಿತದ ಫಲವನ್ನು ಕಸಿದುಕೊಂಡು,

ಅವರಿಗೆ ಮೂಲಭೂತ ಹಕ್ಕುಗಳನ್ನು ನಿರಾಕರಿಸಿದ್ದಾರೆ. ಒಂದೆಡೆಯಲ್ಲಿ—ಎಲ್ಲರಿಗಾಗಿ ಆಹಾರ ಬೆಳೆಸುವ ರೈತ ತನ್ನ ಕುಟುಂಬದೊಡನೆ ಉಪವಾಸ ಬಿದ್ದಿದ್ದಾನೆ. ಜಗತ್ತಿನ ಮಾನ ಕಟ್ಟಿಗಾಗಿ ವಸ್ತ್ರ ನೇಯುವ ನೇಕಾರನಿಗೆ ತನ್ನ ಮಾನ ಮುಚ್ಚಿ ಕೊಳ್ಳಲು ಕೂಡ ಬಟ್ಟೆಯಿಲ್ಲ. ಮಹೋನ್ನತ ಅರಮನೆಗಳನ್ನು ನಿರ್ಮಿಸುವ ಕಲಾಕುಶಲರು ಕೊಳಚೆಯಲ್ಲಿ ಬಿದ್ದು ಸಾಯು ತ್ತಾರೆ. ಇನ್ನೊಂದೆಡೆಯಲ್ಲಿ—ಸಮಾಜದ ಜಿಗಣೆಗಳಂತಿ ರುವ ಭಂಡವಾಳಶಾಹಿ ಶೋಷಣೆಗಾರರು ತಮ್ಮ ಚಪಲ ತೀರಿಸಿ ಕೊಳ್ಳಲು ಮಿಲಿಯಗಟ್ಟಲೆ ಚೆಲ್ಲುತ್ತಾರೆ...... ಇಂತಹ ಪರಿಸ್ಥಿತಿ ಮುಂದುವರಿಯಬಾರದು...... ತೀವ್ರ ಬದಲಾವಣೆ ಅವಶ್ಯ. ಆದುದರಿಂದ ಸಮಾಜವಾದದ ಆಧಾರದ ಮೇಲೆ ಸಮಾಜ ವನ್ನು ಪುನರ್ರಚಿಸುವುದು ಈ ಅಭಿಪ್ರಾಯದಲ್ಲಿ ವಿಶ್ವಾಸವಿರುವ ಪ್ರತಿಯೊಬ್ಬನ ಕರ್ತವ್ಯವಾಗಿದೆ."

"ಕ್ರಾಂತಿಯು ಭಂಡವಾಳವಾದ ಮತ್ತು ವರ್ಗಭೇದದ ಅಂತಿಮ ಘಂಟೆಯನ್ನು ಬಾರಿಸುವುದು. ವಿದೇಶೀಯ ಮತ್ತು ದೇಶೀಯ ಶೋಷಣೆಗಾರರ ನೊಗದಡಿಯಲ್ಲಿ ನರಳುತ್ತಿರುವ ಮಿಲಿಯಾಂತರ ಜನರಿಗೆ ಸುಖ ಸಂತೋಷಗಳನ್ನು ತರುವುದು. ...ಹೊಸ ರಾಷ್ಟ್ರ, ಹೊಸ ಸಮಾಜ ಪದ್ಧತಿಯ ಹುಟ್ಟಿಗೆ ಕಾರಣ ವಾಗುವುದು. ಎಲ್ಲದಕ್ಕಿಂತ ಹೆಚ್ಚಾಗಿ, ಕ್ರಾಂತಿಯು ಶ್ರಮ ಜೀವಿಗಳ ಸರ್ವಾಧಿಕಾರವನ್ನು ಸ್ಥಾಪಿಸಿ, ರಾಜ್ಯಾಧಿಕಾರದಿಂದ ಸಮಾಜದ ಜಿಗಣೆಗಳನ್ನು ಸಂಪೂರ್ಣ ಹೊರದೂಡುವುದು."



ಬೇಗನೆ ಪ್ರಕಟವಾಗಲಿದೆ !

# ಹೊಗೆಯ ಹೂ

## ಕೃಷನ್ ಚಂದ್ರರ ಐದು ಕಥೆಗಳ ಸಂಕಲನ

ಬೆಲೆ:

ಹನ್ನೆರಡಾಣೆ

ಅನುವಾದಕರು:

—" ಈಶ್ವರ "

ಪ್ರಕಾಶಕರು:

**ಕನ್ನಡ ಪ್ರಪಂಚ ಪ್ರಕಾಶನ,**

ಮಂಗಳೂರು 2.